॥ ದಾಸನ ಮಾಡಿಕೊ ಎನ್ನ ॥

ದಾಸನ ಮಾಡಿಕೊ ಎನ್ನ । ಸ್ವಾಮಿ । ಸಾಸಿರನಾಮದ ವೆಂಕಟರಮಣ ॥ ಪ ॥

ದುರಬುದ್ಧಿಗಳನೆಲ್ಲ ಬಿಡಿಸೋ । ನಿನ್ನ । ಕರುಣ ಕವಚವೆನ್ನ ಹರಣಕ್ಕೆ ತೊಡಿಸೋ ॥
ಚರಣ ಸೇವೆ ಎನಗೆ ಕೊಡಿಸೊ । ಅಭಯ । ಕರಪುಷ್ಪವನೆನ್ನ ಶಿರದಲ್ಲಿ ಮುಡಿಸೋ ॥ ೧ ॥

ದೃಡ ಭಕ್ತಿ ನಿನ್ನಲ್ಲಿ ಬೇಡಿ । ನಾ । ನಡಿಗೆರಗುವೆನಯ್ಯ ಅನುದಿನ ಪಾಡಿ ॥
ಕಡೆಗಣ್ಣಿಲೇಕೆನ್ನ ನೋಡಿ । ಬಿಡುವೆ ಕೊಡು । ನಿನ್ನ ಧ್ಯಾನದ ಮನವ ಶುಚಿಮಾಡಿ ॥ ೨ ॥

ಮರೆಹೊಕ್ಕವರ ಕಾವಬಿರುದು । ನನ್ನ ಮರೆಯದೆ ರಕ್ಷಣೆ ಮಾಡಯ್ಯ ಪೊರೆದು ॥
ದುರಿತಗಳೆಲ್ಲವ ತರಿದು । ಸಿರಿ ಪುರಂದರ ವಿಠಲ ಎನ್ನನು ಪೊರೆದು ॥ ೩ ॥